# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ : 1481

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀಮತಿ ಎಸ್. ವೀಣಾ ಅಚ್ಚಯ್ಯ
(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ಸಚಿವರು : ತೋಟಗಾರಿಕೆ ಮತ್ತು ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

ಉತ್ತರಿಸಬೇಕಾದ ದಿನಾಂಕ : 24.09.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಪಶ್ಚಿಮ ಘಟ್ಟ ಪ್ರದೇಶದ ವ್ಯಾಪ್ತಿಯಲ್ಲಿರುವ ಕೊಡಗಿನಲ್ಲಿ ಉತ್ಪಾದನೆಯಾಗುವ ಜೇನುತುಪ್ಪಕ್ಕೆ ದೇಶ, ವಿದೇಶಗಳಲ್ಲಿ ಅಪಾರ ಬೇಡಿಕೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪಶ್ಚಿಮ ಘಟ್ಟ ಪ್ರದೇಶದ ವ್ಯಾಪ್ತಿಯಲ್ಲಿರುವ ಕೊಡಗಿನಲ್ಲಿ ಉತ್ಪಾದನೆಯಾಗುವ ಜೇನುತುಪ್ಪವೂ ಸೇರಿದಂತೆ, ಭಾರತ ದೇಶದ ಉತ್ಪನ್ನವಾದ ಭಾರತೀಯ ಜೇನುತುಪ್ಪ (Indian Honey) ಕ್ಕೆ ದೇಶ ವಿದೇಶಗಳಲ್ಲಿ ಅಪಾರ ಬೇಡಿಕೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ | ಬಂದಿದ್ದಲ್ಲಿ, ಕೊಡಗು ಜಿಲ್ಲೆಯಲ್ಲಿ ಜೇನುಕೃಷಿ ಉತ್ತೇಜನಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಕೊಡಗು ಜಿಲ್ಲೆಯಲ್ಲಿ ಜೇನುಕೃಷಿ ಉತ್ತೇಜನಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳು ಈ ಕೆಳಕಂಡಂತಿದೆ.<br>1. ರಾಜ್ಯವಲಯ ಮಧುವನ ಮತ್ತು ಜೇನುಸಾಕಾಣಿಕೆ ಅಭಿವೃದ್ಧಿ ಯೋಜನೆ ಹಾಗೂ ಜಿಲ್ಲಾವಲಯ ಜೇನುಸಾಕಾಣಿಕೆ ಯೋಜನೆಗಳಡಿ ಜೇನು ಕೃಷಿ ಕೈಗೊಳ್ಳಲು ಆಸಕ್ತಿ ಹೊಂದಿರುವ ರೈತರು / ರೈತ ಮಹಿಳೆಯರು ಹಾಗೂ ಇತರ ಆಸಕ್ತರಿಗೆ ಎರಡು ದಿನಗಳ ಅವಧಿಯ ಜೇನುಕೃಷಿ ತರಬೇತಿಯನ್ನು ನೀಡಲಾಗುತ್ತಿದೆ.<br>2. ರಾಜ್ಯವಲಯ ಮತ್ತು ಜಿಲ್ಲಾ ವಲಯ ಯೋಜನೆಗಳಡಿ ಫಲಾನುಭವಿಗಳಿಗೆ ಪ್ರತಿ ಜೇನು ಪೆಟ್ಟಿಗೆ, ಕುಟುಂಬ ಮತ್ತು ಸ್ಟ್ಯಾಂಡ್ ಖರೀದಿಗೆ ಸಾಮಾನ್ಯ ರೈತರಿಗೆ ಶೇ.75 ರಂತೆ ರೂ.3375/- ಮತ್ತು ಪರಿಶಿಷ್ಟ ಜಾತಿ / ಪಂಗಡದ ರೈತರಿಗೆ ಶೇ.90 ರಂತೆ ರೂ.4050/- ಗಳ ಸಹಾಯಧನ ನೀಡಲಾಗುತ್ತಿದೆ. ಪ್ರತಿ ಫಲಾನುಭವಿ ಗರಿಷ್ಠ 10 ಜೇನು ಪೆಟ್ಟಿಗೆ, ಕುಟುಂಬ ಮತ್ತು ಸ್ಟ್ಯಾಂಡ್ ಗಳಿಗೆ ಸಹಾಯಧನ ಪಡೆಯಬಹುದಾಗಿದೆ.<br>3. ಕೇಂದ್ರ ವಲಯ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಜೇನು ಪೆಟ್ಟಿಗೆ ಮತ್ತು ಕುಟುಂಬ ಖರೀದಿಗೆ ಸಾಮಾನ್ಯ ರೈತರಿಗೆ ಶೇ.40 ರಂತೆ ರೂ.2000/- ಮತ್ತು ಪರಿಶಿಷ್ಟ ಜಾತಿ / ಪಂಗಡದ ರೈತರಿಗೆ ಶೇ.90 ರಂತೆ ರೂ.3600/- ಗಳ ಸಹಾಯಧನ ನೀಡಲಾಗುತ್ತಿದೆ. ಪ್ರತಿ ಫಲಾನುಭವಿ ಗರಿಷ್ಠ 50 ಜೇನು ಪೆಟ್ಟಿಗೆ ಮತ್ತು ಕುಟುಂಬಗಳಿಗೆ ಸಹಾಯಧನ ಪಡೆಯಬಹುದಾಗಿದೆ. |

